ಡಾ॥ ಜಿ. ಎಸ್. ದೀಕ್ಷಿತ್

# ಸ್ವಾಗತ ಭಾಷಣ

---

ಪ್ರೊ॥ ಗೋಕಾಕ್ ಇವರೇ, ಪ್ರೊ॥ ಚಿದಾನಂದಮೂರ್ತಿ ಇವರೇ ಮತ್ತು ಪ್ರೊ॥ ಡಿ. ವಿ. ಅರಸು ಇವರೇ, ಕರ್ನಾಟಕ ಇತಿಹಾಸ ಅಕಾದೆಮಿಯ ಸದಸ್ಯರೆ ಮತ್ತು ಸಭಿಕರೆ,

ಕರ್ನಾಟಕ ಇತಿಹಾಸ ಅಕಾದೆಮಿಯ ಪ್ರಥಮ ವಾರ್ಷಿಕ ಸಮ್ಮೇಳನಕ್ಕೆ ತಮ್ಮೆಲ್ಲರಿಗೂ ಹೃತ್ಪೂರ್ವಕ ಸ್ವಾಗತ. ಸುಮಾರು ಒಂದು ವರ್ಷದ ಹಿಂದೆ ಡಾ॥ ಸೂರ್ಯನಾಥ ಕಾಮತ್‌ರ ನೇತೃತ್ವದಲ್ಲಿ ಇತಿಹಾಸ ಅಧ್ಯಯನದಲ್ಲಿ ಆಸ್ಥೆಯುಳ್ಳ ಕೆಲವರು ಇಂತಹ ಸಂಸ್ಥೆಯೊಂದನ್ನು ಸ್ಥಾಪಿಸಬೇಕೆಂದು ನಿಶ್ಚಯಿಸಿ ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ಪ್ರಾಧ್ಯಾಪಕ ಡಾ॥ ಎಂ. ವಿ. ಶ್ರೀನಿವಾಸ್ ಇವರ ಅಧ್ಯಕ್ಷತೆಯಲ್ಲಿ ಒಂದು ಕಾರ್ಯಕಾರಿ ಸಮಿತಿಯನ್ನು ಆಯ್ಕೆ ಮಾಡಿದರು. ಡಾ॥ ಸೂರ್ಯನಾಥ ಕಾಮತ್ ಮತ್ತು ಶ್ರೀ ಲಕ್ಷ್ಮಣ್ ತೆಲಗಾವಿಯವರ ನಾಯಕತ್ವದಲ್ಲಿ 'ಇತಿಹಾಸ ದರ್ಶನ' ವೆಂಬ ನಿಯತಕಾಲಿಕವನ್ನು ಪ್ರಕಟಿಸಬೇಕೆಂದು ಮುಂದಿನ ಒಂದು ಕಾರ್ಯಕಾರಿ ಸಮಿತಿ ಸಭೆಯಲ್ಲಿ ನಿರ್ಣಯಿಸಲಾಯಿತು. ಸಾರ್ವಜನಿಕರಲ್ಲಿ ಇತಿಹಾಸದಲ್ಲಿ ಆಸಕ್ತಿ ಬೆಳಸುವ ಉದ್ದೇಶದಿಂದ ಅಕಾದೆಮಿಯು ಬೆಂಗಳೂರಿನ ವಿವಿಧ ಭಾಗಗಳಲ್ಲಿ ಉಪನ್ಯಾಸಗಳನ್ನು ಏರ್ಪಡಿಸಿತು. ನವೆಂಬರ್ ೮೭ರಲ್ಲಿ ಅಕಾದೆಮಿಯ ನಿಬಂಧನೆಯ ಕರಡನ್ನು ಅಂಗೀಕರಿಸಲಾಯಿತು ಮತ್ತು ಹೊಸ ಕಾರ್ಯಕಾರಿ ಸಮಿತಿಯನ್ನು ಆಯ್ಕೆ ಮಾಡಲಾಯಿತು. ೧೯೮೭ರ ಡಿಸೆಂಬರ್ ೧೪ರಂದು ಸಚಿವರಾದ ಪ್ರೊ॥ ಎ. ಲಕ್ಷ್ಮೀಸಾಗರ್ ಇವರು ಅಕಾದೆಮಿಯ ಔಪಚಾರಿಕ ಉದ್ಘಾಟನೆಯನ್ನು ನೆರವೇರಿಸಿದರು. ಅದೇ ಸಭೆಯಲ್ಲಿ ಡಾ॥ ಎಂ. ಚಿದಾನಂದಮೂರ್ತಿಯವರು 'ಇತಿಹಾಸ ದರ್ಶನ' ನಿಯತಕಾಲಿಕೆಯ ಪ್ರಥಮ ಸಂಚಿಕೆಯನ್ನು ಬಿಡುಗಡೆ ಮಾಡಿದರು.

ಇದುವರೆಗೂ ಸುಮಾರು ೨೦೦ ಜನರು ಅಕಾದೆಮಿಗೆ ಸದಸ್ಯರಾಗಿರುವುದು ನಮಗೆ ಹೆಮ್ಮೆಯ ವಿಷಯ. ಸಾಧ್ಯವಿದ್ದಷ್ಟು ಕಾಲೇಜು ಹಾಗೂ ಶಾಲೆಗಳ ಶಿಕ್ಷಕರನ್ನು ಸದಸ್ಯರನ್ನಾಗಿ ಮಾಡಿ, ಅವರ ಮೂಲಕ ಮತ್ತು ಅವರ ವಿದ್ಯಾರ್ಥಿಗಳ ಮೂಲಕ ಇತಿಹಾಸ ಸ್ಮಾರಕಗಳು, ಶಾಸನಗಳು ಹಾಗೂ ಐತಿಹಾಸಿಕ ಕಾಗದ ಪತ್ರಗಳ ಅನ್ವೇಷಣೆ, ಸಂರಕ್ಷಣೆ ಮತ್ತು ಸಂಗ್ರಹಗಳನ್ನು ಮಾಡಬೇಕೆಂಬುದು ಅಕಾದೆಮಿಯ ಉದ್ದೇಶ. ಪುರಾತತ್ವ ಇಲಾಖೆ, ಪತ್ರಾಗಾರ ಇಲಾಖೆ ಮತ್ತು ವಿಶ್ವವಿದ್ಯಾನಿಲಯಗಳು ಈ ಕೆಲಸಗಳನ್ನು ಮಾಡುತ್ತಿವೆ. ಅವುಗಳಿಗೆ ನಮ್ಮ ಸದಸ್ಯರು ತಮ್ಮ ಸಹಕಾರವನ್ನು ನೀಡಿರುತ್ತಾರೆ.

ಇನ್ನು ಇವತ್ತಿನ ನಮ್ಮ ಅತಿಥಿಗಳ ಬಗೆಗೆ ಒಂದೆರಡು ಮಾತು. ಸಮ್ಮೇಳನದ ಉದ್ಘಾಟಕರಾದ ಪ್ರೊ॥ ಗೋಕಾಕರು ಅಲಂಕರಿಸಿದ ಹುದ್ದೆಗಳ, ಅವರಿಗೆ ದೊರೆತ ಪುರಸ್ಕಾರಗಳ, ಅವರು ಸದಸ್ಯರಾಗಿರುವ

ಸಮಿತಿಗಳ ಮತ್ತು ಅವರ ಗ್ರಂಥಗಳ ಪಟ್ಟಿ ಬಹಳ ದೊಡ್ಡದಾಗಿರುವುದು ತಮ್ಮೆಲ್ಲರಿಗೂ ತಿಳಿದ ವಿಷಯ. ಮತ್ತು ಎಲ್ಲಾ ಕನ್ನಡಿಗರಿಗೂ ಹೆಮ್ಮೆಯ ವಿಷಯ. ನಮ್ಮ ಸಂಸ್ಥೆಯಂತಹ ಹೊಸ ಸಂಸ್ಥೆ ಯಾವ ರೀತಿ ಕೆಲಸ ಮಾಡಬಹುದೆಂದು ಮಾರ್ಗದರ್ಶನ ಮಾಡಲು ಅವರು ಅಪಾರ ಅನುಭವದಿಂದ ಸಮರ್ಥರಾಗಿದ್ದಾರೆ.

ಪ್ರೊ॥ ಚಿದಾನಂದಮೂರ್ತಿಯವರು ಅಕಾದೆಮಿಯ ಕೆಲಸದಲ್ಲಿ ಈಗಾಗಲೇ ನೆರವಾಗಿ ನಮ್ಮವರೇ ಆಗಿದ್ದಾರೆ. ಅವರು ದ್ರಾವಿಡ ಭಾಷಾಶಾಸ್ತ್ರ ಮತ್ತು ಇತಿಹಾಸ ಸಂಶೋಧನೆ—ಇವರೆಡರಲ್ಲಿಯೂ ಗಣ್ಯರೆಂದು ಭಾರತದಲ್ಲಿಯೂ ಹೊರಗೂ ಹೆಸರು ಮಾಡಿದ್ದಾರೆ. ಅವರು ಅಕಾದೆಮಿಯ ಪ್ರಥಮ ವಾರ್ಷಿಕ ಸಮ್ಮೇಳನದ ಅಧ್ಯಕ್ಷ ಪದವಿಯನ್ನು ಸ್ವೀಕರಿಸಿ ಅದಕ್ಕೆ ಒಂದು ಘನತೆಯನ್ನು ತಂದುಕೊಟ್ಟಿದ್ದಾರೆ. ಇತ್ತೀಚೆಗೆ ಒಂದು ಪಾದ ಯಾತ್ರೆ ಮಾಡಿ, ಇಂತಹ ಪಾದಯಾತ್ರೆಗಳಿಂದ ಇತಿಹಾಸ ಸಂಶೋಧನೆಗೆ ಹೇಗೆ ಸಹಾಯವಾಗುತ್ತದೆ ಮತ್ತು ಇತಿಹಾಸದ ಬಗ್ಗೆ ಜನಸಾಮಾನ್ಯರಲ್ಲಿ ಆಸ್ಥೆಯನ್ನು ಹೇಗೆ ಹುಟ್ಟಿಸಬಹುದೆನ್ನುವುದನ್ನು ತೋರಿಸಿಕೊಟ್ಟಿದ್ದಾರೆ. ಇನ್ನೂ ಅನೇಕ ಪಾಠಗಳನ್ನು ಅವರಿಂದ ಕಲಿಯುವ ಸುಯೋಗವು ನಮ್ಮ ಸದಸ್ಯರಿಗೆ ಈಗ ಲಭ್ಯವಾಗಿದೆ.

ನಮ್ಮ ನಿಯತಕಾಲಿಕ 'ಇತಿಹಾಸ ದರ್ಶನ'ದ ಎರಡನೆಯ ಸಂಚಿಕೆಯನ್ನು ಪ್ರೊ॥ ಡಿ. ವಿ. ಅರಸು ಇವರು ಇವತ್ತು ಬಿಡುಗಡೆ ಮಾಡಲು ದಯವಿಟ್ಟು ಒಪ್ಪಿಕೊಂಡಿದ್ದಾರೆ. ಅವರು ಮೈಸೂರು ವಿಶ್ವವಿದ್ಯಾನಿಲಯ ದಲ್ಲಿ ಅಧ್ಯಾಪಕರಾಗಿ, ರಿಜಿಸ್ಟ್ರಾರರಾಗಿ, ವೈಸ್‌ಛಾನ್ಸಲರಾಗಿ ಒಳ್ಳೆಯ ಖ್ಯಾತಿಯನ್ನು ಗಳಿಸಿ, ಈಗ ಪದವಿ ಪೂರ್ವ ಶಿಕ್ಷಣ ಮಂಡಳಿಯ ನಿರ್ದೇಶಕರಾಗಿ ಮಂಡಳಿಯನ್ನು ಸಮರ್ಥವಾಗಿ ನಿರ್ವಹಿಸುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ನಮ್ಮ ಸದಸ್ಯರಲ್ಲಿ ಪದವಿಪೂರ್ವ ಕಾಲೇಜುಗಳ ಇತಿಹಾಸ ಶಿಕ್ಷಕರು ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಅವರ ಅನುಕೂಲಕ್ಕಾಗಿ ಈ ಸಮ್ಮೇಳನವನ್ನು ಅವರ ಪರೀಕ್ಷೆಯ ಕೆಲಸ ಮುಗಿಯುವ ಹೊತ್ತಿಗೆ ಸರಿಯಾಗಿ ಇಟ್ಟಿದ್ದೇವೆ. ಪದವಿಪೂರ್ವ ಶಿಕ್ಷಣದಲ್ಲಿಯ ಇತಿಹಾಸ ವಿಷಯದ ಪಠ್ಯಕ್ರಮವನ್ನು ಕುರಿತು ಒಂದು ವಿಚಾರಗೋಷ್ಠಿಯನ್ನು ನಮ್ಮ ಅಕಾದೆಮಿಯು ಯೋಜಿಸಬೇಕೆಂದು ಪ್ರೊ॥ ಅರಸು ಇವರು ಸಲಹೆ ಮಾಡಿದ್ದಾರೆ. ಇವತ್ತಲ್ಲಾ ನಾಳೆ ಈ ವಿಚಾರಗೋಷ್ಠಿಯನ್ನು ನಾವು ಏರ್ಪಡಿಸುತ್ತೇವೆ. ಈ ರೀತಿಯಾಗಿ ಇತಿಹಾಸ ಅಧ್ಯಯನ ದಲ್ಲಿ ಮತ್ತು ನಮ್ಮ ಅಕಾದೆಮಿಯಲ್ಲಿ ಆಸ್ಥೆಯುಳ್ಳ ಪ್ರೊ॥ ಅರಸು ಅವರು ಅಕಾದೆಮಿಯ ನಿಯತಕಾಲಿಕ 'ಇತಿಹಾಸ ದರ್ಶನ' ಎರಡನೆಯ ಸಂಚಿಕೆಯನ್ನು ಬಿಡುಗಡೆ ಮಾಡಲು ಒಪ್ಪಿರುವುದು ನಮ್ಮ ಸುಕೃತ.

ಸಮ್ಮೇಳನಕ್ಕೆ ಬೊಂಬಾಯಿ, ಬೀದರ್‌ಗಳಂತಹ ದೂರ ದೂರ ಪಟ್ಟಣಗಳಿಂದ ಸದಸ್ಯರು ಬಂದು ಕರ್ನಾಟಕ ಇತಿಹಾಸ ಅಕಾದೆಮಿಯನ್ನು ಸ್ಥಾಪಿಸಲು ನಾವು ಮಾಡಿದ ಪ್ರಯತ್ನ ಅವಶ್ಯವಾಗಿತ್ತೆಂದು ತೋರಿಸಿ ಕೊಟ್ಟಿದ್ದಕ್ಕೆ ಅವರಿಗೂ ಇವತ್ತಿನ ಸಭೆಗೆ ಬಹುಸಂಖ್ಯೆಯಲ್ಲಿ ಬಂದ ಸಭಿಕರಿಗೂ ವಂದನೆಗಳು. ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಆಜೀವ ಸದಸ್ಯರಾಗಿ ಈ ಸಂಸ್ಥೆ ಹೆಚ್ಚಿನ ಸೇವೆಯನ್ನು ಶಾಶ್ವತವಾಗಿ ನೆರವೇರಿಸಲು ಸಹಾಯ ಮಾಡಿ ಎಂದು ಸಾರ್ವಜನಿಕರನ್ನು ಕೇಳಿಕೊಂಡು ಇನ್ನೊಮ್ಮೆ ನಿಮ್ಮೆಲ್ಲರಿಗೂ ಸ್ವಾಗತವನ್ನು ಬಯಸಿ ನನ್ನ ಮಾತನ್ನು ಮುಗಿಸುತ್ತೇನೆ.

O